# ಮುಂಜಾವು

ವಾರಪತ್ರಿಕೆ.

ಸಂಪಾದಕ: ಸಿರಿಮನೆ ನಾಗರಾಜ್

ರಿಜಿಸ್ಟರ್ಡ್ ನಂ ಕೆಆರ್‌ಎನ್‌ಎಸ್ - 19

3ನೇ ವರ್ಷ 37ನೇ ಸಂಚಿಕೆ ಕೊಪ್ಪ 16-6-1985 ಭಾನುವಾರ ಬೆಲೆ 40 ಪೈಸೆ

## ಬಸರಿಕಟ್ಟೆಯಲ್ಲೊಂದು ಗಿರಿಜನ ಆಶ್ರಮ ಶಾಲೆ

ಬಸರಿಕಟ್ಟೆ: ಒಂದರಿಂದ ನಾಲ್ಕನೇ ತರಗತಿಯವರೆಗಿನ ಗಿರಿಜನ ಮಕ್ಕಳಿಗಾಗಿರುವ ಸರ್ಕಾರಿ ಆಶ್ರಮ ಶಾಲೆಯೊಂದನ್ನು ಇಲ್ಲಿ ಜೂನ್ 16 ರಂದು ರಾಜ್ಯದ ಪ್ರಾಥಮಿಕ ಮತ್ತು ವಯಸ್ಕರ ಶಿಕ್ಷಣ ಮಂತ್ರಿ ಗೋವಿಂದ ಗೌಡರು ಉದ್ಘಾಟಿಸಿದರು.

ಸಮಾರಂಭದ ಅಧ್ಯಕ್ಷತೆಯನ್ನು ಜಿಲ್ಲಾಧಿಕಾರಿಗಳು ವಹಿಸಿದ್ದರು. ಒಂದೂವರೆ ವರ್ಷದ ಹಿಂದೆ ಇದೇ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಗೋವಿಂದಗೌಡರೇ ಈ ಕಟ್ಟಡಕ್ಕೆ ಶಂಕುಸ್ಥಾಪನೆ ಮಾಡಿದ್ದುದೊಂದು ವಿಶೇಷ.

ಸಮಗ್ರ ಗಿರಿಜನ ಅಭಿವೃದ್ಧಿ ಯೋಜನೆಯ ಆಶ್ರಯದಲ್ಲಿ ನಡೆಯುವ ಈ ಶಾಲೆಗಾಗಿ 1 ಲಕ್ಷ 75 ಸಾವಿರ ರೂ. ವೆಚ್ಚದ ಕಟ್ಟಡವನ್ನು ಕೊಪ್ಪ ತಾ.ಅ. ಮಂಡಳಿ ಎನ್.ಆರ್.ಇ.ಪಿ. ಯ ಗಿರಿಜನ ಘಟಕದಿಂದ ಕಟ್ಟಿಸಿದೆ. ಇಲ್ಲಿ ಮಕ್ಕಳ ಊಟ, ವಸತಿ, ಪುಸ್ತಕ, ಬಟ್ಟೆ ಮತ್ತಿತರ ಎಲ್ಲಾ ಅಗತ್ಯಗಳನ್ನೂ ಉಚಿತವಾಗಿ ಒದಗಿಸಲಾಗುತ್ತದೆ.

ಗೋವಿಂದ ಗೌಡರು ಮಾತನಾಡುತ್ತಾ, ಸರ್ಕಾರ ಹರಿಜನ ಗಿರಿಜನರ ಮಕ್ಕಳ ವಿದ್ಯಾಭ್ಯಾಸಕ್ಕೆ ಇಷ್ಟು ಸೌಕರ್ಯ ಕೊಡುತ್ತಿದ್ದರೂ ನೆರೆಯಲ್ಲೇ ಇರುವ ಸಾರ್ವಜನಿಕ ವಿದ್ಯಾರ್ಥಿನಿಲಯಕ್ಕೆ ಕೇವಲ 8 ಜನ ವಿದ್ಯಾರ್ಥಿಗಳು ಮಾತ್ರ ಸೇರಿರುವುದು ಬಹಳ ಶೋಚನೀಯ. ತಂದೆ-ತಾಯಿಗಳು ಇದನ್ನು ಅರ್ಥ ಮಾಡಿಕೊಂಡು ತಮ್ಮ ಮಕ್ಕಳಿಗೆ ಈ ಸೌಲಭ್ಯವನ್ನು ಪಡೆದುಕೊಳ್ಳಬೇಕು ಎಂದು ಕರೆಯಿತ್ತರು.

ಸರ್ಕಾರದ ಈ ಆಶ್ರಮ ಶಾಲೆಗಳಿಗೂ ರಾಮಕೃಷ್ಣಾಶ್ರಮ ಮುಂತಾದ ಖಾಸಗಿ ಆಶ್ರಮ ಶಾಲೆಗಳಿಗೂ ಹೋಲಿಸಿದ ಸಚಿವರು, ಶುಚಿತ್ವ, ಶಿಸ್ತು ಮತ್ತು ಶಿಕ್ಷಣ ಮಟ್ಟಗಳಲ್ಲಿ ಈ ಎರಡಕ್ಕೂ ಅಜಗಜಾಂತರ ಇರುವುದಕ್ಕೆ ವಿಷಾದಿಸಿದರು. "ಅಂಥ ಕೆಲವೆಡೆ ಕೇವಲ 400 ರೂ. ಸಂಬಳ ಕೊಡುವುದು ಸರ್ಕಾರದ ಗಮನಕ್ಕೆ ಬಂದಿದೆ. ಇಲ್ಲಿ ಸರ್ಕಾರ ತಿಂಗಳಿಗೆ 700 ರಿಂದ 1400 ರೂ. ವರೆಗೂ ಸಂಬಳ ಕೊಡುತ್ತೆ. ಆದರೂ ಇಲ್ಲಿನ ಕೆಲಸದ ಗುಣಮಟ್ಟ ಬಹಳ ಕಳಪೆಯಾಗಿದೆ. ಕೆಲಸದಲ್ಲಿ ತೀರ ಅಸಡ್ಡೆ ಕಾಣುತ್ತದೆ. ಇದು ಸುಧಾರಿಸಲೇಬೇಕು. ಇಲ್ಲವಾದರೆ ಸರ್ಕಾರ ಸರಿಯಾದ ಕ್ರಮ ತೆಗೆದುಕೊಳ್ಳಬೇಕಾಗುತ್ತದೆ" ಎಂದೂ ಅವರು ಎಚ್ಚರಿಸಿದರು.

ಜಿಲ್ಲಾಧಿಕಾರಿಗಳು ಮಾತನಾಡುತ್ತ, ಸರ್ಕಾರಿ ಅಧಿಕಾರಿಗಳು ಗ್ರಾಮಾಂತರ ಪ್ರದೇಶಗಳಲ್ಲಿ ಕೆಲಸ ಮಾಡಲು ದೊಡ್ಡ ಪಟ್ಟಣಗಳಲ್ಲಿರುವಂಥ ಸೌಕರ್ಯಗಳನ್ನು ನಿರೀಕ್ಷೆ ಮಾಡುತ್ತಾರೆ. ಸವಲತ್ತುಗಳನ್ನು ಕೇಳುವುದರಲ್ಲೇ ಸಮಯವೆಲ್ಲ ಹೋಗುತ್ತಿದೆ. ಇದು ತಪ್ಪು. ಮೊದಲು ಸ್ಥಳೀಯ ಪರಿಸ್ಥಿತಿಗೆ ಹೊಂದಿಕೊಂಡು, ಅಲ್ಲಿರುವ ಸೌಕರ್ಯಗಳನ್ನೇ ಬಳಸಿಕೊಂಡು ಕೆಲಸ ನಿರ್ವಹಿಸುವುದನ್ನು ಕಲಿಯಬೇಕು. ಎಂದು ಹೇಳಿದರು.

ಉಪ ವಿಭಾಗಾಧಿಕಾರಿ ಹೆಚ್. ಗೋವಿಂದಪ್ಪ ಸ್ವಾಗತಿಸಿ, ಗಿರಿಜನ ಅಭಿವೃದ್ಧಿ ಯೋಜನಾಧಿಕಾರಿ ಕೆ. ಎಸ್. ಮೃತ್ಯುಂಜಯ ವಂದಿಸಿದರು.

ಈ ಶಾಲೆಯಲ್ಲಿ 50 ಮಂದಿ ವಿದ್ಯಾರ್ಥಿ/ವಿದ್ಯಾರ್ಥಿನಿಯರಿಗೆ ಅವಕಾಶವಿದ್ದು ಆಗಲೇ ಪೂರ್ತಿ ಮಕ್ಕಳು ಸೇರಿದ್ದಾರೆಂದು ಕೊಪ್ಪ ಕ್ಷೇತ್ರಾಭಿವೃದ್ಧಿ ಅಧಿಕಾರಿ ಪಿ. ಬಾಲಪ್ಪ 'ಮುಂಜಾವು'ಗೆ ತಿಳಿಸಿದರು.

## ಪರ್ಮಿಟ್ ಆದ ಬಸ್ ಶೀಘ್ರ ಓಡಿಸಲು ಒತ್ತಾಯ

ಶಾನುವಳ್ಳಿ: ಶೃಂಗೇರಿ-ಕೊಪ್ಪ ಮಾರ್ಗದಲ್ಲಿರುವ ಕಾವಾಡಿಯಿಂದ ಬೇಗಾನೆ, ಬಿಲಗದ್ದೆ ಮಾರ್ಗವಾಗಿ ಶಾನುವಳ್ಳಿಗೆ ಸಂಪರ್ಕ ಕಲ್ಪಿಸುವ ರಸ್ತೆಯಲ್ಲಿ ಬಸ್ ಓಡಿಸಲು ಶಿವಶಂಕರ್ ಕಂಪನಿಗೆ ಪರ್ಮಿಟ್ ಆಗಿ 2 ತಿಂಗಳಾದರೂ ಬಸ್ ಓಡಿಸುತ್ತಿಲ್ಲವೆಂದಿರುವ ಗ್ರಾಮಸ್ಥರು ಕೂಡಲೇ ಬಸ್ ಓಡಿಸಲು ಒತ್ತಾಯಿಸಿದ್ದಾರೆ.

## ಸರಳ ಮದುವೆ

ಶೃಂಗೇರಿ: ಈ ತಾಲ್ಲೂಕಿನ ಸೂರುಗೋಡು ಚಂದ್ರಶೇಖರ್ ಎಂಬವರು ಶಿವಮೊಗ್ಗ ತಾ|| ಲಕ್ಕಿನಕೊಪ್ಪದ ಬಿ.ಎಸ್. ರತ್ನ ಎಂಬವರನ್ನು ಅತ್ಯಂತ ಸರಳ ರೀತಿಯಲ್ಲಿ ನ. ರಾ. ಪುರದ ಜೈನ ಬಸದಿಯಲ್ಲಿ ವಿವಾಹವಾಗಿದ್ದಾರೆ.

ಈ ಮದುವೆಗೆ ಕರೆಯೋಲೆ, ಪುರೋಹಿತರು, ಧಾರೆಮಣಿ ಯಾವುದೂ ಇರಲಿಲ್ಲ. ಶೃಂಗೇರಿಯ ಕಾಲೇಜು ಉಪನ್ಯಾಸಕರಾದ ಕೆ. ಪುಟ್ಟಯ್ಯನವರು ರಚಿಸಿದ ಪ್ರೀತಿ, ಸಮಾನತೆಗಳ ಆಧಾರದ 'ಮಂತ್ರ'ವನ್ನು ಕಲ್ಕುಳಿ ವಿಠಲ ಹೆಗ್ಡೆ ಓದಿದರು. ನೆರೆದ ಜನರಿಗೆ ಸರಳ ಮದುವೆಯ ಉದ್ದೇಶವನ್ನು ವಿವರಿಸಲಾಯಿತು.

## ತಾಲ್ಲೂಕು ಕಚೇರಿಯಲ್ಲಿ ಕಡತ ಸ್ವಚ್ಛತಾ ಕಾರ್ಯಕ್ರಮ

ಕೊಪ್ಪ: ಸರ್ಕಾರದ ಕಚೇರಿಗಳಲ್ಲಿ ಹಳೆಯ ದಾಖಲೆಗಳನ್ನು ಎ (ಶಾಶ್ವತ), ಬಿ (30 ವರ್ಷ), ಸಿ (10 ವರ್ಷ), ಡಿ (5 ವರ್ಷ) ಮತ್ತು ಇ (1 ವರ್ಷ) ಎಂಬುದಾಗಿ ವರ್ಗೀಕರಿಸಿ ಜೋಡಿಸಿಡುವ ಪದ್ಧತಿಯೊಂದನ್ನು ಜಾರಿಗೆ ತರಲಾಗಿದ್ದು, ಅನಗತ್ಯವಾದ ಹಳೇ ಕಡತಗಳನ್ನೆಲ್ಲ ಸರ್ಕಾರದ ಅಂಗೀಕೃತ ಟೆಂಡರ್‌ದಾರರಿಗೆ ವಿಲೇವಾರಿ ಮಾಡಲಾಗುತ್ತದೆ.

ಇದರಂತೆ ಇಲ್ಲಿನ ತಾ|| ಕಚೇರಿಯಲ್ಲಿ ಜೂನ್ 15 ರೊಳಗೆ ದಾಖಲೆ ಜೋಡಣೆ ಮುಗಿದಿದ್ದು ಸುಮಾರು 5-6 ಕ್ವಿಂಟಾಲ್‌ನಷ್ಟು ಅನುಪಯುಕ್ತ ಕಡತಗಳನ್ನು ವಿಲೇವಾರಿಗೆ ಹಾಕಲಾಗಿದೆ.

ಈ ಕ್ರಮದಿಂದಾಗಿ ಇನ್ನು ಮುಂದೆ ಹಳೇ ರಿಕಾರ್ಡುಗಳನ್ನು ಹುಡುಕಿ ತೆಗೆಯುವುದು ಬಹಳ ಸುಲಭವಾಗುತ್ತದೆಂದು ತಹಸೀಲ್ದಾರ್ ಎಸ್. ಕರೀಗೌಡ ತಿಳಿಸಿದ್ದಾರೆ.

## ಶೃಂಗೇರಿ ಪಶುವೈದ್ಯ ಆಸ್ಪತ್ರೆಗೆ ಸಂಚಾರಿ ಘಟಕ

ಶೃಂಗೇರಿ: ಇಲ್ಲಿನ ಪಶುವೈದ್ಯ ಆಸ್ಪತ್ರೆಗೆ ಸಂಚಾರಿ ಘಟಕವೊಂದು ಮಂಜೂರಾಗಿರುವುದಾಗಿ ವರದಿಯಾಗಿದೆ. ಗ್ರಾಮಾಂತರ ಜನತೆ ಈ ಸೌಲಭ್ಯದ ಪೂರ್ಣ ಪ್ರಯೋಜನ ಪಡೆಯಬೇಕೆಂದು ವೈದ್ಯಾಧಿಕಾರಿ ಸೂರ್ಯನಾರಾಯಣ ವಿನಂತಿಸಿದ್ದಾರೆ.

## ಶಿವಮೊಗ್ಗ ಅಡಿಕೆ ಪೇಟೆ

ತಾರೀಕು: 11-6-1985

ಸರಕು: 2680 - 3039

ಬೆಟ್ಟೆ: 2200 - 2380

ಗೊರಬಲು: 1500 - 1918

## ಸಕಲೇಶಪುರ ಏಲಕ್ಕಿ ಧಾರಣೆ

| ವ್ಯಾಪಾರದ ತಾರೀಕು | ಗರಿಷ್ಠ ಧಾರಣೆ | ಸರಾಸರಿ ಧಾರಣೆ |
|---|---|---|
| 4.6.85 | 294 | 202 |
| 5.6.85 | 240 | 144 |
| 6.6.85 | 285 | 129 |
| 7.6.85 | 291 | 136 |



## ಬ್ಯಾಂಕ್‌ಗಳ ಸಾಲ ಸೌಲಭ್ಯ ಸದುಪಯೋಗಪಡಿಸಿಕೊಳ್ಳಲು ಕರೆ

ಕೊಪ್ಪ: ಬ್ಯಾಂಕುಗಳು ಸರ್ಕಾರದ ನೆರವಿನೊಂದಿಗೆ ಒದಗಿಸುವ ಸಾಲಗಳನ್ನು ಬಡಜನತೆ ಸದುಪಯೋಗಪಡಿಸಿಕೊಂಡು ಆರ್ಥಿಕವಾಗಿ ಮುಂದುವರಿದು ಯಾರಿಗೂ ತಲೆ ತಗ್ಗಿಸದೆ ಬದುಕಬೇಕು. ತಮ್ಮ ಮಕ್ಕಳಿಗೆ ಉತ್ತಮ ವಿದ್ಯಾಭ್ಯಾಸ ಕೊಡಿಸಬೇಕು. ಹಾಗೆಯೇ ಸಕಾಲದಲ್ಲಿ ಮರು ಪಾವತಿ ಮಾಡಿ ಇನ್ನಷ್ಟು ಸೌಲಭ್ಯಗಳನ್ನು ಪಡೆಯಬೇಕು ಎಂದು ಸಚಿವ ಗೋವಿಂದ ಗೌಡರು ಇಲ್ಲಿ ಕರೆ ನೀಡಿದರು.

ಅವರು ಇಲ್ಲಿನ ಸ್ಟೇಟ್ ಬ್ಯಾಂಕ್ ಆಫ್ ಮೈಸೂರು ಶಾಖೆ ಜೂನ್ 16 ರಂದು ಏರ್ಪಡಿಸಿದ್ದ ಐ. ಆರ್.ಡಿ.ಪಿ. ಆಶ್ರಯದ ಸಾಲ ವಿತರಣೆ ಸಮಾರಂಭದ ಅಧ್ಯಕ್ಷತೆ ವಹಿಸಿ, 40 ಮಂದಿಗೆ ತಲಾ 3000 ರೂ. ಗಳ ಮಂಜೂರಾತಿ ಪತ್ರಗಳನ್ನು ವಿತರಣೆ ಮಾಡಿದರು.

ಮುಂದುವರಿದು ಅವರು, ಸರ್ಕಾರ ಅಪಾರ ಖರ್ಚು ಮಾಡಿ ಬಡಬಗ್ಗರಿಗಾಗಿ ಒದಗಿಸಿರುವ ವೃದ್ಧಾಪ್ಯ ವೇತನ, ವಿಧವಾ ಮಾಸಾಶನ, ಹೆರಿಗೆ ಭತ್ಯೆ ಮುಂತಾದುವನ್ನು ಅವುಗಳ ವ್ಯಾಪ್ತಿಗೆ ಬರದಷ್ಟು ಅನುಕೂಲತೆ, ಆದಾಯ ಅಥವಾ ಆಶ್ರಯ ಉಳ್ಳವರೂ ಸಹ ಪಡೆದುಕೊಳ್ಳುತ್ತಿರುವುದು ಹಲವು ಕಡೆ ಕಂಡುಬರುತ್ತಿದೆ. ಹೀಗಾದರೆ ತೀರ ಕಡು ಬಡವರಿಗೆ ಈ ಸೌಲಭ್ಯಗಳನ್ನು ಒದಗಿಸುವುದು ಹೇಗೆ? ಎಂದು ಪ್ರಶ್ನಿಸಿ, ದಯವಿಟ್ಟು ಹೀಗೆ ಮಾಡಬೇಡಿ ಎಂದು ವಿನಂತಿಸಿದರು.

ಸ್ವಾಗತ ಭಾಷಣ ಮಾಡಿದ ಶಾಖಾ ಮ್ಯಾನೇಜರ್ ವೆಂಕಟಾಚಲ ಅಯ್ಯಂಗಾರ್ ಅವರು, ತಮ್ಮ ಬ್ಯಾಂಕು 1982-83 ರಿಂದೀಚಿನ ಮೂರು ವರ್ಷಗಳಲ್ಲಿ ಮತ್ತು ಪ್ರಸಕ್ತ ವರ್ಷದ ಏಪ್ರಿಲ್‌ನಿಂದೀಚೆಗೆ ವಿವಿಧ ಯೋಜನೆಗಳಡಿ ಒಟ್ಟು 409 ಜನರಿಗೆ 11 ಲಕ್ಷ ರೂ. ಸಾಲ ಸೌಲಭ್ಯ ಒದಗಿಸಿದೆ ಎಂದರು.

ಬ್ಯಾಂಕಿನ ಕ್ಷೇತ್ರಾಧಿಕಾರಿ ಪ್ರಭಾಕರ್ ಬ್ಯಾಂಕಿನಲ್ಲಿ ದುರ್ಬಲ ವರ್ಗದವರಿಗಾಗಿ ಚಾಲ್ತಿಯಲ್ಲಿರುವ ವಿವಿಧ ಯೋಜನೆಗಳನ್ನು ವಿವರಿಸಿದರು. ಕೊಪ್ಪ, ನ.ರಾ.ಪುರ ಮತ್ತು ಶೃಂಗೇರಿಗಳಲ್ಲಿರುವ ಮೈಸೂರು ಬ್ಯಾಂಕ್ ಶಾಖೆಗಳು ಇಂಥ ಸಾಲ ನೀಡಿಕೆಯಲ್ಲಿ ಗುರಿ ಮೀರಿ ಸಾಧಿಸಿರುವುದಲ್ಲದೆ ಅವುಗಳ ವಸೂಲಾತಿಯಲ್ಲೂ ಉತ್ತಮ ಸ್ಥಾನ ಪಡೆದಿವೆ ಎಂದರು.

ಮಾಗ ಚಂದ್ರಶೇಖರ್ ಮತ್ತು ಎ.ಬಿ. ವಾಸಪ್ಪ ಮುಖ್ಯ ಅತಿಥಿಗಳಾಗಿದ್ದರು. ಹರಿಪ್ರಸಾದ್ ವಂದನಾರ್ಪಣೆ ಮಾಡಿದರು.

ಇಂದು ನೀಡಿದ ಸಾಲ ಮಂಜೂರಾತಿಗಳು ಬಳೆ, ಸ್ಟೀಲ್ ಪಾತ್ರೆ, ಮೀನು, ಪೆಟ್ಟಿ, ತೆಂಗಿನಕಾಯಿ ಮುಂತಾದ ವ್ಯಾಪಾರಗಳಿಗಾಗಿದ್ದು, ಇದರಲ್ಲಿ ತಲಾ 1 ಸಾವಿರ ರೂ. ಸರ್ಕಾರದ ಸಹಾಯ ಧನವಾಗಿದೆ. ಈ 40 ಜನರ ಪೈಕಿ ಹಲವರು ಹಿಂದೆಯೂ ಸಾಲ ಪಡೆದಿದ್ದು ಕ್ರಮವಾಗಿ ಮರುಪಾವತಿ ಮಾಡಿ ಇದೀಗ ಎರಡನೇ ಸಲ ಸಾಲ ಪಡೆದವರಾಗಿದ್ದಾರೆ.

ಕೊಪ್ಪ: ಇಲ್ಲಿನ ಪೋಲೀಸರು ಈಚೆಗೆ ಬಸ್‌ಸ್ಟ್ಯಾಂಡಿನಲ್ಲಿ ರಾತ್ರಿ ಸಂಶಯದ ಮೇಲೆ ಬಂಧಿಸಿದ ಮೂವರು ಈಚೆಗೆ ನಡೆದ 5 ಕಳ್ಳತನಗಳಿಗೆ ತಾವೇ ಕಾರಣರೆಂದು ಒಪ್ಪಿಕೊಂಡಿದ್ದಾರೆ. ಅವರನ್ನು ನ.ರಾ. ಪುರ ಉಪ ಬಂದೀಖಾನೆಯಲ್ಲಿ ಇಡಲಾಗಿದೆ.

## ಹುಲಿ ಹಾವಳಿ ಸಂತ್ರಸ್ತರು ಒಟ್ಟಾಗಿ

…ಕೊಪ್ಪ ವಿಭಾಗದಲ್ಲಿ ಹುಲಿ ಹಾವಳಿ ಅವ್ಯಾಹತವಾಗಿ ನಡೆದೇ ಇದೆ. ಮೂರ್‍ನಾಲ್ಕು ಸ್ಥಳಗಳಲ್ಲಿ ಖಾಯಂ ಆಗಿ ಸೇರಿಕೊಂಡಿರುವ ಹುಲಿಗಳು, ಪ್ರತಿ ರಾತ್ರಿಯೆಂಬಂತೆ ಎದುರಿಗೆ ಸಿಕ್ಕ ಜಾನುವಾರನ್ನೆಲ್ಲ ಕೊಲ್ಲುತ್ತ ಆ ಪ್ರದೇಶದ ಜನರಿಗೆ ಸರ್ವನಾಶವನ್ನು ತಂದೊಡ್ಡಿವೆ.

ರೈತರ ಪಾಲಿಗೆ ಈಗ ತುಂಬ ಸೂಕ್ಷ್ಮವಾದ ಕಾಲ. ಕೈಯಲ್ಲಿ ಹಣವಿರುವುದಿಲ್ಲ. ಅದರ ನಡುವೆ ಬೇಸಾಯದ ವಿಪರೀತ ಕೆಲಸ ಇರುತ್ತದೆ. ಈ ಸಮಯದಲ್ಲಿ ಒಂದು ಎತ್ತನ್ನೇನಾದರೂ ಹುಲಿ ಹಿಡಿಯಿತೆಂದರೆ ರೈತ ಸತ್ತಂತೆಯೇ. ಬೇಸಾಯದ ಕೆಲಸ ನಿಲ್ಲುವಂತಿಲ್ಲ. ತಕ್ಷಣ ಬೇರೆ ಎತ್ತು ತರಬೇಕು. ಆದರೆ ಅರ್ಜಂಟಿಗೆ ಬೇರೆ ಎತ್ತು ಸಿಗುವುದಿಲ್ಲ. ತರಲು ದುಡ್ಡು ಹೊಂದಿಸುವುದೂ ಸುಲಭವಲ್ಲ. ಇಂಥ ಸ್ಥಿತಿ ಈ ಪ್ರದೇಶಗಳಲ್ಲಿ ಹಲವಾರು ರೈತರಿಗೆ ಪ್ರತಿ ವರ್ಷ ಒದಗುತ್ತಿದೆ.

ಈಚೆಗೆ ಸಿರಿಮನೆ ಕಡೆ ಹುಲಿ ಹಾವಳಿ ವರದಿ ಪರಿಶೀಲನೆಗೆ ಭೇಟಿಕೊಟ್ಟಿದ್ದ ಶೃಂಗೇರಿ ರೇಂಜರ್‌ಗೆ ಅಲ್ಲಿನ ಪರಿಸ್ಥಿತಿ ನೋಡಿ ನಂಬುವುದಕ್ಕೇ ಆಗಲಿಲ್ಲವಂತೆ.

ಆದರೂ ಈ ಹಾವಳಿ ತಡೆಗಟ್ಟಲು ಏನೂ ಮಾಡುವಹಾಗಿಲ್ಲ; ಕಾಡಿನ ನಾಶ ತಪ್ಪಿಸುವುದು, ಬೇಟೆ ನಿಲ್ಲಿಸುವುದು, ಆ ಮೂಲಕ ಹುಲಿಗೆ ಕಾಡಿನಲ್ಲಿ ಆಹಾರ, ಆಶ್ರಯ ಸಿಗುವಂತೆ ಮಾಡುವುದು—ಒಂದೇ ಮಾರ್ಗ ಎಂದೇ ಅಧಿಕಾರಿಗಳ ನಿಲುವು.

ಆದರೆ ರಾಜಕಾರಣಿಗಳು, ಇಲಾಖೆ ಮತ್ತು ಕಾಡುಕಳ್ಳರು ಸೇರಿ ಎಲ್ಲೆಲ್ಲೋ ಕಾಡು ನಾಶ ಮಾಡಿದ್ದಕ್ಕೆ (ಇಲ್ಲೂ ಅವರೇ ನಾಶ ಮಾಡುತ್ತಿದ್ದಾರೆ. ರೈತರಲ್ಲ. ರೈತರು ಕಾಡು ನಾಶ ತಪ್ಪಿಸಲು ಪ್ರಯತ್ನಿಸುತ್ತಿದ್ದಾರೆ.) ಇಲ್ಲಿನ ರೈತರು ವಿನಾಶ ಎದುರಿಸಬೇಕಾಗಿದೆ.

ಈ ಹುಲಿಗಳಲ್ಲಿ ಒಂದೆರಡನ್ನಾದರೂ ಹಿಡಿದರೆ ಸಮಸ್ಯೆಯನ್ನು ತಕ್ಕಮಟ್ಟಿಗೆ ನಿಯಂತ್ರಿಸಬಹುದೆಂದು ಎಲ್ಲಾ ರೈತರ ಅನಿಸಿಕೆ. ಕಡೇ ಪಕ್ಷ ಅದೊಂದು ಪ್ರಯತ್ನ ಮಾಡಿ ನೋಡಬಹುದು. ಅದರಿಂದ ಎದುರಾಗಬಹುದಾದ ಬೇರೆ ತರದ ಸಮಸ್ಯೆ ಈ ಹಾವಳಿಗಿಂತ ಸಹ್ಯವಾಗಿರಬಲ್ಲದು. ಆದರೆ ಈ ಬಗ್ಗೆ ಇಲಾಖೆಯ ಒಲವಿಲ್ಲ.

ಇದೊಂದು ಕೊನೇ ಪ್ರಯತ್ನ ಮಾಡುವಂತೆ ಇಲಾಖೆಗೆ ಮನವರಿಕೆ ಮಾಡಬೇಕಾದರೆ ಒಬ್ಬಿಬ್ಬರಿಂದ ಸಾಧ್ಯವಿಲ್ಲ. ಹುಲಿ ಹಾವಳಿ ವಿಪರೀತವಾಗಿರುವ ಮೂರು ನಾಲ್ಕು ಪ್ರದೇಶಗಳ ರೈತರಾದರೂ ಒಟ್ಟಾಗಿ ಒಂದು ಸಮಿತಿಯಂಥದೇನನ್ನಾದರೂ ಮಾಡಿಕೊಂಡು ಅರಣ್ಯ ಮಂತ್ರಿಗಳಿಗೂ ಇಲಾಖೆಯ ಹಿರಿಯ ಅಧಿಕಾರಿಗಳಿಗೂ ಮನವಿ ಸಲ್ಲಿಸುವಲ್ಲಿಂದ ಹಿಡಿದು ಬೇರೆ ಬೇರೆ ಮಟ್ಟದವರೆಗೆ ಚಳುವಳಿ-ಹೋರಾಟ ನಡೆಸಿದರೆ ಪ್ರಯೋಜನವಾಗಬಹುದು.

ಕನಿಷ್ಠ ಪಕ್ಷ ಹುಲಿಯ ಖಾಯಂ ನೆಲೆಗಳಾಗಿರುವ ಸಿರಿಮನೆ, ಬಿಲಗದ್ದೆ-ಹುಲುಗಾರು ಹಾಗೂ ಕಾನೂರು-ಕಟ್ಟನಮನೆ ಈ ಊರುಗಳ ಸುತ್ತಮುತ್ತಲವರು, ಜೊತೆಗೆ ಬೆಳವಿನಕೊಡಿಗೆ, ಕಲ್ಲುಗುಡ್ಡೆ ಮುಂತಾಗಿ ಹುಲಿಯ 'ರುಚಿ' ಕಂಡ ಗ್ರಾಮಗಳವರು ಇಂಥದೊಂದು ಚಳುವಳಿಯ ಹಾದಿಯನ್ನು ಈಗಲಾದರೂ ಹಿಡಿಯದಿದ್ದರೆ ಮುಂದೆ ಇಂಥ ಪ್ರಯತ್ನವೇ ವ್ಯರ್ಥವಾಗಬಹುದು.

ಈ ದಿಕ್ಕಿನಲ್ಲಿ 'ಮುಂಜಾವು'ನಿಂದ ಎಂಥ ಸಹಕಾರ ಬೇಕೆಂದು ರೈತರು ತಿಳಿಸಿದರೆ ನಾವು ಅದಕ್ಕೆ ಸಿದ್ಧರಾಗಿರುತ್ತೇವೆ.

—ಸಂಪಾದಕ

## ಅಭಿಮಾನ ವ್ಯಕ್ತಿಪೂಜೆಯಾದಾಗ

ನಮ್ಮ ನಡುವೆಯೇ ಇರುವ ಒಬ್ಬ ಗೆಳೆಯನ ಈಚಿನ ವರ್ತನೆ ಇನ್ನೂ ಹಲವರಲ್ಲಿ ಇರಬಹುದಾದ್ದರಿಂದ ಆ ಕುರಿತು ಬರೆಯುತ್ತಿದ್ದೇನೆ.

ವ್ಯಕ್ತಿಪೂಜೆ ಭಾರತಕ್ಕಾಗಲಿ ಕರ್ನಾಟಕಕ್ಕಾಗಲಿ ಹೊಸತೇನಲ್ಲ. ಅದರಿಂದಾಗುತ್ತಿರುವ ಅನಾಹುತಗಳು ನಾವು ಓದಿದ ಅಥವಾ ಕೇಳಿದ ವಿಷಯಗಳೇ. ನಮ್ಮ ಈ ಗೆಳೆಯನದೂ ಇದೇ ವಿಷಯ.

ಈಗ ಈತನ ರೂಮಿನಲ್ಲಿ ಒಂದು ರಾಮಕೃಷ್ಣ ಹೆಗಡೆ ಫೋಟೋ ಇದೆ. ಅದಕ್ಕೆ ದೀಪಹಚ್ಚಿ, ಹೂಹಾಕಿ ನಮಸ್ಕಾರ ಮಾಡುತ್ತಾನೆ. ಹೆಗಡೆ ಬಗ್ಗೆ ಮೆಚ್ಚಿ ಮಾತನಾಡಿದಾಗ ಸಂತಸ ತಾಳುತ್ತಾನೆ. ತೆಗಳಿದರೆ ತೀರಾ ತದ್ವಿರುದ್ಧ ಈಚೆಗೆ ಈತ ಇದೇ ವಿಷಯದಲ್ಲಿ ಕೋಪದ ಪರಾಕಾಷ್ಠೆ ತಲುಪಿ, ಹೊಡೆಯುವಷ್ಟು ಉದ್ರೇಕಗೊಂಡಿದ್ದ.

ಚುನಾವಣಾ ಸಮಯದ ಲಂಕೇಶ್ ಪತ್ರಿಕೆಯನ್ನು ಹೊಗಳಿದ್ದ. ಬಾಟ್ಲಿಂಗ್ ಅವ್ಯವಹಾರ ಕುರಿತ ಲಂಕೇಶ್ ಪತ್ರಿಕೆಯನ್ನು ಬಾಯಿಗೆ ಬಂದಂತೆ ಬಯ್ದು ನಿಂದಿಸಿದ್ದ. ಒಟ್ಟಾರೆ ಹೆಗಡೆಯಾಗಲೀ, ಜನತಾ ಸರ್ಕಾರವಾಗಲಿ, ಯಾವುದೇ ತಪ್ಪು ಮಾಡಿದ್ದನ್ನು ತೋರಿಸಿದರೆ ಸಿಡಿಮಿಡಿಗುಟ್ಟಿ, ಮೊಂಡುವಾದ ನಡೆಸುವ ಹವ್ಯಾಸ ಈತನದಾಗಿದೆ.

ಇದೊಂದು ತೀರಾ ಸಣ್ಣ ವಿಷಯ. ಆದರೆ ಇಂಥದ್ದೇ ಒಂದು ಗುಂಪು ರಚನೆಯಾದಾಗ ಎಂಥಾ ಕಾರ್ಯಕ್ಕಿಳಿದೀತು ಎಂಬುದನ್ನು ಯೋಚಿಸಿದಾಗ ವ್ಯಕ್ತಿಪೂಜೆಯ ಅನಿಷ್ಟತೆಯ ಬಗ್ಗೆ ಅರಿವಿರುವವರಿಗೆ ಖೇದವಾಗುವುದು ಸಹಜ. ಈ ವರ್ಗ ಕಾಂಗ್ರೆಗಿಂತಲೂ ಮತ್ತೊಂದು ರಾಕ್ಷಸೀ ಸಂಸ್ಕೃತಿಗೆ ನಾಂದಿ ಹಾಡಿದರೆ ಜನ ಜನತಾ ಪಕ್ಷವನ್ನು ಆಯ್ಕೆ ಮಾಡಿದ್ದಕ್ಕೆ ಸಾರ್ಥಕತೆ ಏನು ಬಂತು?

ಅತಿಯಾದ ಅಭಿಮಾನ ತಾಳಿ ಗತಿಗೆಡಿಸುವುದಕ್ಕಿಂತ ಜನತಾ ಸರ್ಕಾರದ ಸಾಧನೆಯನ್ನು ಅದು ನೀಡುತ್ತಿರುವ ಸೌಕರ್ಯಗಳನ್ನು ಜನತೆಗೆ ಮುಟ್ಟಿಸುವಲ್ಲಿ ಇಂಥ ವ್ಯಕ್ತಿಗಳು ನೆರವಾದರೆ ಎಲ್ಲರಿಗೂ ಕ್ಷೇಮ.

—ರಮೇಶ್ ಎಸ್.ವಿ., ಬೇಗಾರು.

## ಆಡಳಿತದಲ್ಲಿ ಚುರುಕು-ಹೊಸತನ ಇತ್ಯಾದಿ...

ವಿಮಾನ ಪರಿಚಾರಕನೊಬ್ಬ ಪ್ರಯಾಣಿಕರ ಕಡೆ ಸಾಕಷ್ಟು ಮುಗುಳುನಗೆ ಬೀರಲಿಲ್ಲವೆಂಬುದಕ್ಕಾಗಿಯೇ ವಜಾ ಮಾಡಲ್ಪಟ್ಟದ್ದನ್ನು ಅಮೆರಿಕದ ಟೆಕ್ಸಾಸ್‌ನ ಪೋರ್ಟ್‌ವರ್ತ್ ನ್ಯಾಯಾಲಯ ಎತ್ತಿಹಿಡಿಯಿತಂತೆ. ಹಾಗೆಂದು ತಾ. 9ರ ಪತ್ರಿಕೆಯೊಂದರಲ್ಲಿ ಸುದ್ದಿ.

ಆದರೆ ಅನೇಕ ಸಾರ್ವಜನಿಕ ಕಚೇರಿಗಳಲ್ಲಿ ಜವಾಬ್ದಾರಿಯುತ ಅಧಿಕಾರಿಗಳಿಂದ ಕೂಡ ಜಬರ್‌ದಸ್ತಿಗೆ ಗುರಿಯಾಗಬೇಕಾದ್ದು ಸರ್ವೇಸಾಮಾನ್ಯವಾಗಿರುವ ನಮಗೆ ಇಂಥ ವಿದೇಶೀ ಸುದ್ದಿಗಳನ್ನು ಓದಿದಾಗ ನಮ್ಮ ದೇಶದಲ್ಲೂ ಇಂಥ ಪರಿಸ್ಥಿತಿ ಎಂದಾದರೂ ನಿರ್ಮಾಣವಾದೀತೆ? ಎನ್ನಿಸುತ್ತದೆ.

ಕಳೆದ ಕೆಲವು ವರ್ಷಗಳಿಂದ ಪೂರಾ ತುಕ್ಕು ಹಿಡಿದುಹೋಗಿರುವ ಸರ್ಕಾರಿ ಆಡಳಿತ ಯಂತ್ರವನ್ನು ಚುರುಕುಗೊಳಿಸಬೇಕೆನ್ನುತ್ತಾರೆ ಪ್ರಧಾನಿ. ಕನ್ನಡನಾಡಿನ ಜನತಾ ಸರ್ಕಾರ ಕೂಡ ಈ ಬಗ್ಗೆ ಅನೇಕ ಕ್ರಮಗಳನ್ನು ಕೈಗೊಳ್ಳಲು ಪ್ರಾರಂಭಿಸಿದೆ. ಕೆಲವು ಕಚೇರಿಗಳಲ್ಲಿ ಇದರ ಪರಿಣಾಮ ಸಹ ಕಂಡು ಬರುತ್ತಿದೆ. ಆದರೆ ಸಾಮ್ರಾಜ್ಯಶಾಹಿ ಧಿಮಾಕು ಇನ್ನೂ ಎಷ್ಟು ಉಳಿದಿದೆ ಎಂಬುದಕ್ಕೆ ನನ್ನದೊಂದು ಅನುಭವ ಹೇಳುತ್ತೇನೆ.

ನಮ್ಮೂರ ಸಂಸ್ಥೆಯೊಂದರ ಜೂನ್ 12ರ ಒಂದು ವಿಶೇಷ ಕಾರ್ಯಕ್ರಮಕ್ಕೆ ಹಣ ಮಂಜೂರಾತಿ ಬಗ್ಗೆ ಜಿಲ್ಲಾಧಿಕಾರಿಗಳಿಂದ ರಾಜ್ಯದ ಧಾರ್ಮಿಕ ವಿಷಯಗಳ ಕಚೇರಿಯೊಂದಕ್ಕೆ ಕಳುಹಿಸಲ್ಪಟ್ಟಿದ್ದ ಕಡತಕ್ಕೆ ಜರೂರು ಮಂಜೂರಾತಿ ಆಗಬೇಕಿದ್ದುದರಿಂದ ಸಂಸ್ಥೆಯ ಸದರಿ ಧರ್ಮದರ್ಶಿಗಳಲ್ಲೊಬ್ಬನಾದ ನಾನು 200 ಮೈಲಿ ದೂರದಿಂದ ಆ ಕಚೇರಿಗೆ ಹೋಗಿದ್ದೆ. ಅಲ್ಲಿನ ಮುಖ್ಯ ಅಧಿಕಾರಿಗಳು ಪ್ರವಾಸದಲ್ಲಿದ್ದುದರಿಂದ ಕಿರಿಯ ಅಧಿಕಾರಿಗೆ ವಿಷಯ ತಿಳಿಸಿ, ಮನವಿ ಸಲ್ಲಿಸಿದೆ. ಮರುದಿನ ಬರಲು ಹೇಳಿದರು. ಆದರೆ ಮರುದಿನ ಅವರ ಕೊಠಡಿಗೆ ಹೋದಾಗ ಅವರು ಇದ್ದಕ್ಕಿದ್ದಂತೆ ರೇಗಿ, "ಹೋಗ್ರಿ ಆಚೆಗೆ" ಎಂದು ಬಡಬಡಿಸಿದರು. ಅವರಿಗೆ ಯಾವ ರೀತಿಯೂ ಅಪಚಾರ ಮಾಡದಿದ್ದರೂ ಆ

(ಮೂರನೇ ಪುಟಕ್ಕೆ)

### ಸಾಮಾಜಿಕ ಅರಣ್ಯ ಯೋಜನೆ ವಿಚಾರ ಸಂಕಿರಣಕ್ಕೆ 'ನಮ್ಮ ಬಹಿಷ್ಕಾರ' ಕುರಿತು ಒಂದು ಪ್ರತಿಕ್ರಿಯೆ

## ಅರಣ್ಯ ಸಂರಕ್ಷಕರ 'ಧರ್ಮಾಚರಣೆ'

ಮಾನ್ಯರೆ,

ತಾ. 26.5.85 ರ ಸಂಚಿಕೆಯಲ್ಲಿ 'ನಮ್ಮ ಬಹಿಷ್ಕಾರ' ತಲೆ ಬರಹದ ನಿಮ್ಮ ಲೇಖನ ಪ್ರತಿಯೊಬ್ಬ ವಿಚಾರವಂತನೂ ಗಂಭೀರವಾಗಿ ಯೋಚಿಸತಕ್ಕದ್ದಾಗಿದೆ. ಅಂದಿನ ಸಭೆಯಲ್ಲಿದ್ದವರ ವಿಚಾರವಂತಿಕೆಯ ಬಗ್ಗೆಯೇ ಸಂದೇಹ ಮೂಡುತ್ತದೆ. ಏಕೆಂದರೆ ಪ್ರಜಾಸತ್ತೆಯ ಅರಿವಿದ್ದ ಯಾರೇ ಆದರೂ ಅಂದು ನಿಮ್ಮಗಳ ವಿಚಾರ ಮತ್ತು ನಿಲುವನ್ನು ಬೆಂಬಲಿಸಬೇಕಿತ್ತು. ಬದಲಾಗಿ, ತೀರ ಅವೈಜ್ಞಾನಿಕವಾದ (ನಮ್ಮ ಸಂವಿಧಾನದ ಆಶಯಕ್ಕೆ ವಿರುದ್ಧವಾದದು ಕೂಡ ಪರ್ಜನ್ಯ ಜಪದಿಂದ ಮಳೆ ತರಿಸುವ ವಿಚಾರಕ್ಕೆ ಪರೋಕ್ಷವಾಗಿ ಬೆಂಬಲಿಸಿದ ಇವರುಗಳ ವಿಚಾರವಂತಿಕೆ ನಾಚಿಕೆಗೇಡು.

ರಾಜ್ಯವು 55 ಕೋಟಿ ರೂ. ವೆಚ್ಚ ಮಾಡಿ (ಅದೂ ಸಾಲ ಮಾಡಿ) ಈ 'ಸಾಮಾಜಿಕ ಅರಣ್ಯ ಯೋಜನೆ'ಯನ್ನು ಜಾರಿಗೆ ತರುವ ಮೊದಲು ಇರುವ ಅರಣ್ಯವನ್ನು ಸರಿಯಾದ ರೀತಿಯಲ್ಲಿ ಸಂರಕ್ಷಿಸುವುದು ಮೊದಲ ಅಗತ್ಯ. ಆದರೆ ಈಗ ನಾಶವಾಗುತ್ತಿರುವ ಅರಣ್ಯ ಸಂಪತ್ತಿನಲ್ಲಿ ಬಹುದೊಡ್ಡ ಪಾಲು ಸಂರಕ್ಷಕರ ಕಾರಣದಿಂದಲೇ ನಾಶವಾಗುತ್ತಿದೆ ಎಂದರೆ ತಪ್ಪಾಗಲಾರದು. "ಕೊಡಲಿಯ ಕಾವು ಕುಲಕ್ಕೆ ಮೃತ್ಯು" ಎಂದ ಹಾಗೆ. ಈಗ ಎಲ್ಲಾದರೂ ಒಂದು ಮರ ಕಡಿದ ವಿಷಯ ತಿಳಿದ ಕೂಡಲೇ ಮೊದಲ ಕ್ರಮವಾಗಿ ಮೇಲಧಿಕಾರಿಗಳು ಅದರಲ್ಲಿ ಇಲಾಖೆಯವರು ಯಾರಿದ್ದಾರೆ ಎಂದು ತನಿಖೆ ನಡೆಸುವುದು ಸೂಕ್ತವಾಗುವಂಥ ಪರಿಸ್ಥಿತಿ ಇದೆ. ಹೀಗಿರುವಾಗ, ಇಲಾಖೆಯ ಅಧಿಕಾರಿಗಳು ಮರದ ಪೀಠೋಪಕರಣ ಹೊಂದುವುದಕ್ಕೆ ತೀವ್ರವಾದ ಮಿತಿ ವಿಧಿಸಬೇಕೆಂಬ ನಿಮ್ಮಗಳ ವಿಚಾರದಲ್ಲಿ ಅಸಮವಿಜಸವಾದುದೇನೂ ಇರಲಿಲ್ಲ.

ಈ ಸಂರಕ್ಷಕರ ಅರಣ್ಯ ಸಂರಕ್ಷಣಾ ನೀತಿಗೆ ನಾನು ಕಂಡ ಎರಡು ಉದಾಹರಣೆ ಕೊಡುತ್ತೇನೆ. ದೊಡ್ಡಮನೆ ಹಾಗೂ ಸಾಕಷ್ಟು ಪೀಠೋಪಕರಣ ಇರುವ ಒಬ್ಬರು ಈಚೆಗೆ ಎರಡು ಒಳ್ಳೆಯ ನಾಟಾ ಮರವನ್ನು ಕಡಿದರು. ಊರಿನವರ ದೂರಿನಿಂದಾಗಿ ಇಲಾಖೆಯ ಸಿಬ್ಬಂದಿ ಕೂಡಲೆ ಬಂದು ಮಹಜರು ನಡೆಸಿಕೊಂಡು ಹೋದರು. ಆದರೆ ಅದೇ ಸಿಬ್ಬಂದಿ ಶಾಮೀಲಾಗಿ ಆ ಎರಡು ತುಂಡನ್ನು ಬೇರೆಡೆ ಸಾಗಿಸಿ ಅಲ್ಲಿ ಅದೇ ಜಾತಿಯ ಇನ್ನೆರಡು ತುಂಡು ಇಡಿಸಿದರು. ಈ ವಿಚಾರ ತಾ॥ ಮಟ್ಟದ ಅಧಿಕಾರಿಗೆ ತಿಳಿದರೂ ಸುಮ್ಮನಿದ್ದರು.

ಇನ್ನೊಂದೆಡೆ ಒಬ್ಬ ಬಡವ ತನ್ನ ಮನೆಗೆ ತೀವ್ರ ಅಪಾಯಕಾರಿಯಾದ್ದ, ಜಾತಿ ನಾಟವಲ್ಲದ ಮರವೊಂದನ್ನು ಕಡಿದಾಗ ಅಲ್ಲಿಗೆ ಹಾಜರಾದ ಸಿಬ್ಬಂದಿ ಅವನಿಗೆ ಥಳಿಸಿ, ಅವನ ಕೊಡಲಿಯನ್ನು ಕಸಿದುಕೊಂಡು ಗದೆಯ ಹಾಗೆ ಹೆಗಲಿಗೇರಿಸಿ ಭಾರೀ ಮರಗಳ್ಳನನ್ನು ಹಿಡಿದು ಮಹತ್ಕಾರ್ಯ ಸಾಧಿಸಿದ ಠೀವಿಯಿಂದ ಅವನನ್ನು ಕರೆದುಕೊಂಡು ಹೋದರು.

ಎರಡು ಮರ ಕಡಿದವನಿಗೆ ಇನ್ನೆರಡು ಮರ ಕಡಿಯಲು ಪ್ರಚೋದನೆ; ಅದೇ ತನ್ನ ಮನೆಯ, ಕುಟುಂಬದ ರಕ್ಷಣೆಗಾಗಿ ಕಟ್ಟಿಗೆಗೆ ಮಾತ್ರ ಬರುವ ಮರವನ್ನು ಕಡಿದವನಿಗೆ ದಂಡನೆ. ಹೀಗಿದೆ ಇವರ ಅರಣ್ಯ ಸಂರಕ್ಷಣಾ ನೀತಿ!

ಇಂಥ ಪ್ರಕರಣಗಳು ಬೇಕಾದಷ್ಟಿವೆ. ಆದರೆ ಹಲವಷ್ಟು ಪ್ರಕರಣಗಳು ಕಾಡಿನಲ್ಲೇ ಇರುತ್ತವೆ, ಊರಿಗೆ ಬರುವುದೇ ಇಲ್ಲ!

ಈ 'ಧಾರ್ಮಿಕ' ಮಂದಿಯು ಧರ್ಮದಲ್ಲೆಲ್ಲೋ ಒಂದು ಕಡೆ ಹೇಳಿದೆ—"ಅಧರ್ಮ, ಅನೀತಿ ಇರುವಲ್ಲಿ ಮಳೆ-ಬೆಳೆ ಇಲ್ಲದೆ ಕ್ಷಾಮ ಬರುತ್ತದೆ" ಎಂದು. ಇವರ ಅರಣ್ಯ ಸಂರಕ್ಷಣಾ ಧರ್ಮದಲ್ಲಿ ಚ್ಯುತಿಯುಂಟಾದುದಕ್ಕೆ ಇವತ್ತು ಮಳೆ-ಬೆಳೆ ಹೀಗಾಗಿವೆಯೆಂಬುದು ಯಾರಿಗೆ ಗೊತ್ತಿಲ್ಲ? ಆ ಧರ್ಮಚ್ಯುತಿಯನ್ನು ಮುಚ್ಚಿಡುವುದಕ್ಕಾಗಿಯೇ ಇಂಥ "ಪರ್ಜನ್ಯಜಪ"ದಂಥ 'ಧರ್ಮಾಚರಣೆ' ತಾನೆ?

—ಟಿ. ಪಿ. ಶ್ರೀನಾಥ್,
ಹೆಗ್ಗಾರು.

# ಕೆಮ್ಮಣ್ಣುಗುಂಡಿ: 'ತರಂಗ'ದ ಕರೆಗೆ ಓಗೊಡಿ

'ತರಂಗ'ದ ಜೂನ್ 23–29 ರ ಸಂಚಿಕೆಯಲ್ಲಿ ಸಂಪಾದಕರಾದ ಸಂತೋಷಕುಮಾರ ಗುಲ್ವಾಡಿಯವರು ಕೆಮ್ಮಣ್ಣುಗುಂಡಿಯ ಸೊಬಗು-ವೈಭವಗಳನ್ನು ವರ್ಣಿಸುತ್ತ ಅದು ಇಂದು ಇರುವ ದುಃಸ್ಥಿತಿಯನ್ನು ವಿವರಿಸಿ ಮುಖ್ಯಮಂತ್ರಿಗಳಿಗೊಂದು ದೀರ್ಘ ಪತ್ರ ಬರೆದಿದ್ದಾರೆ. ಅತ್ಯುತ್ತಮ ಗಿರಿಧಾಮವಾಗಿರುವ ಅದನ್ನು ಹಾಳುಗೆಡವಿರುವ ಇಲಾಖೆಗಳನ್ನು, ಅಧಿಕಾರಿಗಳನ್ನು ತೀವ್ರ ನೋವಿನಿಂದ ಕಟುವಾಗಿ ಟೀಕಿಸುತ್ತ, ಕಡಿಮೆ ಖರ್ಚಿನಲ್ಲೇ ಇಲ್ಲಿ ಮಾಡಬಹುದಾದ ಅಭಿವೃದ್ಧಿಯ ಕುರಿತು ವಿವರವಾದ ಸಲಹೆಗಳನ್ನು ಮಂಡಿಸಿದ್ದಾರೆ.

ನಿಸರ್ಗ ಪ್ರೇಮಿಗಳು ಮಾತ್ರವಲ್ಲ, ಓದುಬಲ್ಲ ಪ್ರತಿಯೊಬ್ಬರೂ ಓದಲೇಬೇಕಾದ, ಓದಿ ಆಳವಾಗಿ ಆಲೋಚಿಸಬೇಕಾದ ಲೇಖನ ಇದೆಂದು ನನ್ನ ಅನಿಸಿಕೆ. ಹಾಗೆ ಆಲೋಚಿಸಿ, ಈ ಗಿರಿಧಾಮವನ್ನು ವಿನಾಶದಿಂದ ರಕ್ಷಿಸಿ ಪೋಷಿಸುವತ್ತ ಸರ್ಕಾರದ ಗಮನಸೆಳೆಯಲು ಸಾರ್ವಜನಿಕ ಅಭಿಪ್ರಾಯದ ಒತ್ತಡ ರೂಪಿಸುವುದಕ್ಕೆ ಪ್ರತಿಯೊಬ್ಬರೂ ಸಾಧ್ಯವಿರುವಎಲ್ಲಾರೀತಿಯಲ್ಲೂ ಯತ್ನಿಸಬೇಕು.

ಕೆಮ್ಮಣ್ಣುಗುಂಡಿಯ ಪ್ರಶಾಂತ ಸೌಂದರ್ಯವನ್ನು, ರುದ್ರ ರಮಣೀಯತೆಯನ್ನು ವರ್ಣಿಸುವುದು ಸಾಧ್ಯವಿಲ್ಲದ ಮಾತು. ಏನಿದ್ದರೂ ಅದನ್ನು ಸವಿದೇ ತಿಳಿಯಬೇಕು. ಒಬ್ಬ ಪುಟ್ಟ ಹುಡುಗನ ದೃಷ್ಟಿಗೆ ಈ ಸೌಂದರ್ಯ ಕಂಡುಬಂದ ಬಗೆಯನ್ನು ಒಂದು ಸಣ್ಣ ಅನುಭವದ ಮೂಲಕ ಹೇಳುತ್ತೇನೆ.

1978 ರಲ್ಲಿ ನಮ್ಮ ಅಣ್ಣನವರ ಬಳಗದೊಂದಿಗೆ ನಾನು ಕೆಮ್ಮಣ್ಣುಗುಂಡಿಗೆ ಹೋಗಿದ್ದೆ. ಬೆಟ್ಟಗಳ ನೆತ್ತಿಯಲ್ಲಿ ಬಸ್ಸು ಹೋಗುವಾಗ ಕೆಳಗೆ ತುಂಬ ಆಳದಲ್ಲಿ, ದೂರದವರೆಗೂ ಹಚ್ಚ ಹಸುರಿನ ಕಾಡು, ತೋಟಗಳು, ನಡು ನಡುವೆ ತೊರೆ, ಅಬ್ಬಿ, ಬಂಗಲೆ ಇತ್ಯಾದಿಗಳು ಕಾಣುತ್ತ ಅದೊಂದು ಅತ್ಯದ್ಭುತ ನೋಟವಾಗಿರುತ್ತದೆ. ಆಗ ನಮ್ಮ ಅಣ್ಣನವರ 7 ವರ್ಷದ ಮಗ, "ಒಳ್ಳೇ ಏರೋಪ್ಲೇನ್‌ನಲ್ಲಿ ಹೋದ ಹಾಗೆ ಆಗುತ್ತಿದೆ ಅಲ್ವೇನೋ" ಎಂದ. ಅವನ ಕಲ್ಪನೆಗೆ ತಲೆದೂಗುತ್ತ 'ಹೌದಲ್ಲೋ' ಅಂದೆ. ಸ್ವಲ್ಪ ಹೊತ್ತಿನ ನಂತರ ಅವನೆಂದ–"ಹೇಗೂ ನಮ್ಮಂಥ ಬಡವರಿಗೆಲ್ಲ ವಿಮಾನದಲ್ಲಿ ಕೂರಲು ಸಾಧ್ಯವಿಲ್ಲ. ಆದ್ದರಿಂದ ಇದನ್ನೇ ವಿಮಾನವೆಂದು ತಿಳಿಯೋಣ".

ಅವನು ಬಿಚ್ಚಿದ ಈ ಕಲ್ಪನೆಯ ರೆಕ್ಕೆಯ ಮೇಲೆ ಕೂತು ನಾನೂ ಅವನೊಂದಿಗೆ ವಿಮಾನದಲ್ಲಿ ಆ ಪರ್ವತ ಪ್ರದೇಶದಲ್ಲಿ ವಿಹರಿಸಿ ಬಂದೆ!

ಆದರೆ ಗುಲ್ವಾಡಿಯವರ ಲೇಖನ ಓದಿ, ಅಲ್ಲಿ ನಡೆಯುತ್ತಿರುವ ನಿಸರ್ಗ ನಾಶವನ್ನು ಯೋಚಿಸಿದರೆ—ಮುಂದೆಯೂ ಕೂಡ ಆ ಬೆಟ್ಟದ ಮೇಲೆ ಬಸ್ಸಲ್ಲಿ ಹೋಗುವಾಗ ವಿಮಾನದಲ್ಲಿ ಹೋದ ಹಾಗೆ ಆಗಲೂಬಹುದು ಆದರೆ ಆಗ 'ವಿಮಾನದಲ್ಲಿ ಸಹರಾ ಮರುಭೂಮಿಯ ಮೇಲೆ ಹಾರಾಡುತ್ತಿದ್ದೇವೆ' ಎನ್ನಿಸಬಹುದು ಅಷ್ಟೆ.

ಅಂಥ ಕಾಲ ಬರುವ ಮೊದಲು, ಆ ಕಾಲ ಬರುವುದನ್ನು ತಪ್ಪಿಸಲು ಸಾಧ್ಯವಿರುವ ಈಗ, ಪ್ರಜ್ಞೆ ಇರುವವರೆನ್ನಿಸಿಕೊಂಡ ಎಲ್ಲರೂ ಆ ಪ್ರಜ್ಞೆಯನ್ನು ಸ್ವಲ್ಪವಾದರೂ ಕೆಲಸಕ್ಕೆ ಹಚ್ಚಲೇಬೇಕಲ್ಲವೆ?

—ನಾಗರಾಜ್.

# ಹರಿವ ನೀರಿನಿಂದ 'ಗ್ರ್ಯಾವಿಟಿ' ನೀರು ಪೂರೈಕೆ ಯೋಜನೆ ಬೆಳೆಸಲು ನಜೀರ್ ಸಾಬ್ ಕರೆ

ಚಿಕ್ಕಮಗಳೂರು: ಎತ್ತರದ ಪ್ರದೇಶಗಳಲ್ಲಿ ಹರಿಯುವ ನೀರು ಹಲವಾರು ಕಡೆ ದೊರಕುವ ಮಲೆನಾಡಿನಲ್ಲಿ 'ಸಣ್ಣ ಕುಡಿಯುವ ನೀರು ಯೋಜನೆ'ಗಳಿಗೆ ಬದಲಾಗಿ 'ಗ್ರ್ಯಾವಿಟಿ' ಮೂಲಕ ನೀರು ಒದಗಿಸುವ ಯೋಜನೆಗಳನ್ನು ಸಾಧ್ಯವಿದ್ದಲ್ಲೆಲ್ಲ ಕೈಗೊಳ್ಳುವಂತೆ ಗ್ರಾಮಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಮಂತ್ರಿ ಅಬ್ದುಲ್ ನಜೀರ್ ಸಾಬ್ ಜಿಲ್ಲೆಯ ಅಧಿಕಾರಿಗಳಿಗೆ ಸೂಚಿಸಿದ್ದಾರೆ. (ಈಗಾಗಲೇ ಸಚಿವ ಗೋವಿಂದ ಗೌಡರೂ ಸಹ ಇಂಥ ಸಾಧ್ಯತೆಗಳ ಬಗ್ಗೆ ತಮ್ಮ ಕ್ಷೇತ್ರದಲ್ಲಿ ಗಮನ ಇಟ್ಟಿದ್ದಾರೆ.)

ಈಚೆಗೆ ನಡೆದ ಜಿಲ್ಲಾ ಅಭಿವೃದ್ಧಿ ಸಮಿತಿ ಸಭೆಯ ಅಧ್ಯಕ್ಷತೆ ವಹಿಸಿದ್ದ ಅವರು ಕುಡಿವ ನೀರಿನ ಪೂರೈಕೆ ಬಗ್ಗೆ ಹಲವು ಲೋಪದೋಷಗಳನ್ನು ಗಮನಿಸಿ ಸಾರ್ವಜನಿಕ ಜನಾರೋಗ್ಯ ಇಲಾಖೆ (ಪಿ.ಹೆಚ್.ಇ.) ಯನ್ನು ತರಾಟಿಗೆ ತೆಗೆದುಕೊಂಡರಲ್ಲದೆ ಉಪ ಯೋಜನೆಯಲ್ಲಿ ಜಿಲ್ಲೆಗೆ ಮಂಜೂರಾಗಿರುವ 19 ಕುಡಿವ ನೀರು ಯೋಜನೆಗಳನ್ನು ಜೂನ್ ಅಂತ್ಯದೊಳಗೆ ಪೂರ್ಣಗೊಳಿಸಲೂ ಆದೇಶಿಸಿದರು.

ಈ ವರ್ಷ ಜಿಲ್ಲೆಗೆ 589 ಕೊಳವೆ ಬಾವಿಗಳು, 107 ಸಣ್ಣ ಕುಡಿವ ನೀರು ಯೋಜನೆಗಳು ಹಾಗೂ ಪಂಪ್ ಮೂಲಕ

(ನಾಲ್ಕನೇ ಪುಟಕ್ಕೆ)

## ಆಡಳಿತದಲ್ಲಿ ಚುರುಕು....

(ಎರಡನೆ ಪುಟದಿಂದ)

ಕಿರಿಯನ ಇಂಥ ವರ್ತನೆಯಿಂದ 68 ವರ್ಷದವನಾದ ನಾನು ತೀರ ಜಿಗುಪ್ಸೆಪಟ್ಟು ಹೊರಬಂದೆ. ಆದರೆ ಮರುದಿನ ಹಿರಿಯ ಅಧಿಕಾರಿಗಳನ್ನೇ ಕಂಡಾಗ ಬಹಳ ಸೌಜನ್ಯದಿಂದ ಮಾತಾಡಿಸಿ, ಕೆಲಸ ಮಾಡಿಸಿಕೊಡುವುದಾಗಿ ಹೇಳಿದರು. ಅದರಂತೆ ಕೆಲಸವೂ ಆಯಿತು:

ಇಲ್ಲಿ ಗಮನಿಸಬಹುದಾದ ಎರಡು ಅಂಶಗಳೆಂದರೆ: 45 ವರ್ಷಕ್ಕೂ ಮಿಕ್ಕಿ ಇಂಥ ಕಚೇರಿಗಳಿಗೆ ಬೇರೆ ಬೇರೆ ಕೆಲಸಕ್ಕಾಗಿ ಓಡಾಡಿದ ನನ್ನ ಅನುಭವದಲ್ಲಿ, ರಾಜ್ಯ ಸರ್ಕಾರದ ಮುಖ್ಯ ಕಚೇರಿಯೊಂದರಲ್ಲಿ ಕೇವಲ ಐದೇ ದಿನದಲ್ಲಿ, ಅದೂ ಬೇರಾವ 'ಮಾರ್ಗ'ವನ್ನೂ ಹಿಡಿಯುವ ಅಗತ್ಯ ಬೀಳದೆಯೇ, ಹಣ ಖರ್ಚು ಹಾಕುವ ಮಂಜೂರಾತಿಯೊಂದು ಆದುದು ಈ ಜನತಾ ಸರ್ಕಾರದಲ್ಲಿ ಮಾತ್ರ. ಆದರೆ ಮೇಲೆ ಹೇಳಿದ ಕೆಟ್ಟ ಅನುಭವ ಕೂಡ ನನಗೆ ಹೊಸದು.

ಕಚೇರಿಗೆ ಬಂದ ಶ್ರೀಸಾಮಾನ್ಯನನ್ನು ಸೌಜನ್ಯದಿಂದ ಮಾತಾಡಿಸಿ ಜವಾಬು ಕೊಡುವ ಕರ್ತವ್ಯವನ್ನು ಅಧಿಕಾರಿಗಳು–ಸಿಬ್ಬಂದಿ ಕಟ್ಟುನಿಟ್ಟಾಗಿ ನಿರ್ವಹಿಸುವಂತೆ ಮಾಡುವುದು ಆಡಳಿತಕ್ಕೆ ಚುರುಕು–ಹೊಸತನ ಕೊಡುವ ದಿಕ್ಕಿನಲ್ಲಿ ಮೊದಲ ಹೆಜ್ಜೆ.

—ಶಂಕರಪುರ ಬಿ. ಸುಬ್ರಹ್ಮಣ್ಯಂ.

# ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯನ್ವಯ ನೀಡಲಾದ ಸೌಲಭ್ಯಗಳ ದುರುಪಯೋಗ ತಡೆಗೆ ಕಾಯ್ದೆ

ಚಿಕ್ಕಮಗಳೂರು: ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆ ಅಡಿಯಲ್ಲಿ ದುರ್ಬಲ ವರ್ಗಗಳವರಿಗೆ ನೀಡಲಾದ ಸೌಲಭ್ಯಗಳ ದುರುಪಯೋಗ ತಡೆಗಟ್ಟಲು ಸರ್ಕಾರ ಸದ್ಯದಲ್ಲೇ ಕಾಯಿದೆಯೊಂದನ್ನು ತರಲು ಯೋಚಿಸಿರುವುದಾಗಿ ವರದಿಯಾಗಿದೆ.

ಪರಿಶಿಷ್ಟ ಜಾತಿಯವರ ಭೂಮಿಯನ್ನು ಪರಭಾರೆ ಮಾಡುವುದನ್ನು ಹೇಗೆ ಕಾನೂನಿನ ಮೂಲಕ ನಿಷೇಧಿಸಲಾಗಿದೆಯೋ ಹಾಗೆಯೇ ಐ.ಆರ್.ಡಿ.ಪಿ. ಸೌಲಭ್ಯಗಳ ವಿಷಯದಲ್ಲೂ ಕಾನೂನು ಮಾಡಲಿರುವುದಾಗಿ ವರದಿ ಹೇಳಿದೆ.

ಪ್ರಯೋಜನ ಪಡೆಯುವ ದುರ್ಬಲ ವರ್ಗದವರಲ್ಲಿ ಅನಕ್ಷರತೆ, ಪ್ರಜ್ಞೆಯ ಕೊರತೆಗಳಿಂದಾಗಿ ಈ ಸೌಲಭ್ಯಗಳ ಬಗ್ಗೆ ಸರಿಯಾದ ತಿಳುವಳಿಕೆಯಾಗಲಿ, ಜವಾಬ್ದಾರಿಯಾಗಲಿ ಇಲ್ಲದಿರುವುದು, ದಟ್ಟ ದಾರಿದ್ರ್ಯದಿಂದಾಗಿ ಮೂರು ಕಾಸಿಗೆ ಏನನ್ನು ಬೇಕಾದರೂ ಮಾರಿಕೊಳ್ಳಲು ಸಿದ್ಧರಿರುವ ಅವರ ಮನಃಸ್ಥಿತಿ–ಪರಿಸ್ಥಿತಿಗಳೊಂದು ಕಡೆಯಾದರೆ, ಅವರ ಈ ದೌರ್ಬಲ್ಯಗಳನ್ನು ದುರುಪಯೋಗಪಡಿಸಿಕೊಂಡು ತಾವು ಲಾಭ ಮಾಡಿಕೊಳ್ಳುವ, ಅಲ್ಪ ಲಾಭಕ್ಕಾಗಿ ಎಂಥ ತಾಯ್ಗಂಡತನಕ್ಕೂ ಸಿದ್ಧರಿರುವವರ ವರ್ಗ (ಇದರಲ್ಲಿ ಬಹಳ ಜನ ಅನುಕೂಲಸ್ಥರು, ಸಂಭಾವಿತರೇ) ಇನ್ನೊಂದು ಕಡೆ, ಈ ದುರಂತಕ್ಕೆ ಕಿರೀಟವಿಟ್ಟಂತೆ ಭ್ರಷ್ಟ, ಕಂತ್ರಿ, ಕರ್ತವ್ಯನಿಷ್ಠೆಯಿಲ್ಲದ ಅಧಿಕಾರ ವರ್ಗ (ಅಪರೂಪಕ್ಕೆ ಅಲ್ಲೊಬ್ಬ-ಇಲ್ಲೊಬ್ಬರನ್ನು ಬಿಟ್ಟು) ಮತ್ತೊಂದು ಕಡೆ—ಈ ಎಲ್ಲವುಗಳಿಂದಾಗಿ ಇಂದು ದುರ್ಬಲ ವರ್ಗದವರನ್ನು ಮೇಲೆತ್ತುವ ಯಾವುದೇ ಪ್ರಯತ್ನವೂ ಹುಸಿದು, ಕೊಟ್ಟ ಸೌಲಭ್ಯಗಳೆಲ್ಲ ದುರುಪಯೋಗವಾಗುತ್ತಿರುವುದು ಸರ್ವೇಸಾಮಾನ್ಯ.

ನಮ್ಮ ದೇಶದಲ್ಲಿರುವ ಅಮಾನವೀಯ ಸಾಮಾಜಿಕ–ಆರ್ಥಿಕ ವಸ್ತುಸ್ಥಿತಿಯ ಹಿನ್ನೆಲೆಯಲ್ಲಿ ಸರ್ಕಾರ ಕೊಟ್ಟ ತೆಂಗಿನ ಗಿಡವೊಂದನ್ನು ಮಾರಿದ ಬಡವನಿಗಿಂತೂ ಅದು ಸರ್ಕಾರೀ ಸೌಲಭ್ಯದ್ದೆಂದು ಗೊತ್ತಿದ್ದೂ ಅದನ್ನು ಕೊಳ್ಳುವವನಿದ್ದಾನಲ್ಲ, ಅವನು ದೊಡ್ಡ ತಪ್ಪಿತಸ್ಥನೆಂದು ಈ ಉದ್ದೇಶಿತ ಕಾನೂನು ಪರಿಗಣಿಸುವುದಾದರೆ ಅಂಥ ಕಾನೂನು ತಂದ ಉದ್ದೇಶ ಸ್ವಲ್ಪವಾದರೂ ಸಾರ್ಥಕವಾದೀತು.

## ಗ್ರಾವಿಟಿ ನೀರು ಯೋಜನೆ

(ಮೂರನೆ ಪುಟದಿಂದ)

ನೀರೊದಗಿಸುವ 21 ಯೋಜನೆಗಳನ್ನು ಮಂಜೂರು ಮಾಡಲಾಗಿದೆಯೆಂದರು.

ಈ ಸಭೆಯಲ್ಲಿ ಜಿಲ್ಲೆಯ ಶಾಸಕರು ಮತ್ತು ಮಂತ್ರಿ ಗೋವಿಂದ ಗೌಡರು ಸಹ ಹಾಜರಿದ್ದು ಜಿಲ್ಲೆಯ ಮತ್ತು ತಮ್ಮ ಕ್ಷೇತ್ರಗಳ ಕೆಲ ಸಮಸ್ಯೆಗಳನ್ನು ನಜೀರ್ ಸಾಬರ ಗಮನಕ್ಕೆ ತಂದರು.

(ಶೃಂಗೇರಿ ಕ್ಷೇತ್ರದಲ್ಲಿ ಅಧ್ವಾನವಾಗಿರುವ ಪಿ.ಹೆಚ್.ಇ. ಇಲಾಖೆಯ ಕೆಲಸಗಳನ್ನು ಗೋವಿಂದ ಗೌಡರು ಸಚಿವರ ಗಮನಕ್ಕೆ ತಂದರೇ ಎಂಬುದು ಗೊತ್ತಾಗಿಲ್ಲ.)

## ಪಿ. ಯು. ಸಿ. ಫಲಿತಾಂಶ: ಜಿಲ್ಲೆಗೆ 3 ನೇ ಸ್ಥಾನ

ಚಿಕ್ಕಮಗಳೂರು: ಕಳೆದ ಏಪ್ರಿಲ್‌ನಲ್ಲಿ ನಡೆದ ಪಿಯುಸಿ ಪರೀಕ್ಷೆಗಳಲ್ಲಿ ನಮ್ಮ ಜಿಲ್ಲೆ ರಾಜ್ಯದಲ್ಲಿ 3 ನೇ ಸ್ಥಾನ ಪಡೆದಿದೆ. ಮಂಗಳೂರು ಮತ್ತು ಬೆಂಗಳೂರು ಮೊದಲನೇ ಮತ್ತು ಎರಡನೇ ಸ್ಥಾನ ಪಡೆದಿವೆ.

ಜಿಲ್ಲೆಗೆ ಕಳೆದ ವರ್ಷ ಶೇ. 39.78 ಫಲಿತಾಂಶ ದೊರೆತಿದ್ದು ಈ ವರ್ಷ ಅದು 49.88 ಕ್ಕೇರಿದೆ.

## ಜಯಪುರ ಪ್ರೌಢಶಾಲೆಗೆ ಶೇ. 65 ಫಲಿತಾಂಶ

ಜಯಪುರ: 1985 ನೇ ಸಾಲಿನಲ್ಲಿ ನಡೆದ ಎಸ್. ಎಸ್. ಎಲ್. ಸಿ. ಪರೀಕ್ಷೆಯಲ್ಲಿ ಇಲ್ಲಿನ ಪ್ರೌಢ ಶಾಲೆಗೆ ಶೇ. 65 ರಷ್ಟು ಫಲಿತಾಂಶ ಬಂದಿದೆ.

9 ವಿದ್ಯಾರ್ಥಿಗಳು ಪ್ರಥಮ ದರ್ಜೆಯಲ್ಲೂ 18 ವಿದ್ಯಾರ್ಥಿಗಳು ದ್ವಿತೀಯ ದರ್ಜೆಯಲ್ಲೂ ತೇರ್ಗಡೆಯಾಗಿದ್ದಾರೆ. ಹೆಚ್ಚು ಅಂಕ ಗಳಿಸಿದವರು: ನಿವೇದಿತಾ ಕೆ. (436), ಸತೀಶ ಬಿ.ಪಿ. (427), ಮತ್ತು ಶೃಂಗೇಶ್ವರ ಕೆ.ಜಿ. (412),

## ಅಗಳಗಂಡಿ ಪ್ರೌಢಶಾಲೆಯಲ್ಲಿ 'ಮಧುರಮಿಲನ' ಕಾರ್ಯಕ್ರಮ

ಅಗಳಗಂಡಿ: ಇಲ್ಲಿನ ಸರ್ಕಾರಿ ಪ್ರೌಢಶಾಲೆಯಲ್ಲಿ ಹೊಸ ವಿದ್ಯಾರ್ಥಿಗಳನ್ನು ಸ್ವಾಗತಿಸಲು ಜೂನ್ 7 ರಂದು 'ಮಧುರ ಮಿಲನ' ಕಾರ್ಯಕ್ರಮ ಏರ್ಪಡಿಸಲಾಗಿತ್ತು. ಶಾಲಾಭಿವೃದ್ಧಿ ಸಮಿತಿ ಅಧ್ಯಕ್ಷರಾದ ಬಿ. ಹಾಲಪ್ಪಗೌಡ ಅಧ್ಯಕ್ಷತೆ ವಹಿಸಿದ್ದು, ಮುಖ್ಯೋಪಾಧ್ಯಾಯರಾದ ಹೆಚ್. ಆರ್. ಬಸಪ್ಪ ಶಾಲೆಯ ಶಿಸ್ತು ಮತ್ತು ಪಠ್ಯ ಕ್ರಮಗಳ ಬಗ್ಗೆ ಮಕ್ಕಳಿಗೆ ವಿವರಿಸಿದರು-ಎಂ.ವಿ.ಗಂಗಾಧರ್ ಸ್ವಾಗತಿಸಿ, ಎಸ್. ನಾಗರತ್ನ ವಂದಿಸಿದರು.

# ಉಚಿತ ಪಠ್ಯಪುಸ್ತಕ ವಿತರಣೆ

ಕೊಪ್ಪ: ರಾಜ್ಯ ಸರ್ಕಾರದ ಹೊಸ ನೀತಿಯಂತೆ ಸರ್ಕಾರಿ ಶಾಲೆಗಳ ಮಕ್ಕಳಿಗೆ ಉಚಿತ ಪಠ್ಯ ಪುಸ್ತಕಗಳನ್ನು ಹಂಚಿದ ವರದಿಗಳು ವಿವಿಧ ಕಡೆಗಳಿಂದ ಬಂದಿವೆ.

### ಬಿಲಗದ್ದೆ

ಇಲ್ಲಿನ ಕಿರಿಯ ಪ್ರಾಥಮಿಕ ಶಾಲೆಯಲ್ಲಿ ಬಿಲಗದ್ದೆ ಜನತಾ ಪಕ್ಷದ ಅಧ್ಯಕ್ಷರಾದ ಕೆ.ಎಸ್. ರವಿಚಂದ್ರ ಅವರ ಅಧ್ಯಕ್ಷತೆಯಲ್ಲಿ ಮಕ್ಕಳಿಗೆ ಉಚಿತ ಪಠ್ಯಪುಸ್ತಕಗಳನ್ನು ಹೆಚ್.ಜಿ. ಕೇಶವಮೂರ್ತಿ ವಿತರಿಸಿದರು. ಕಾವಳ ಲಕ್ಷ್ಮೀನಾರಾಯಣಪ್ಪ ಮುಖ್ಯ ಅತಿಥಿಗಳಾಗಿದ್ದು, ಪೋಷಕ ವರ್ಗದವರು ಸಭೆಯಲ್ಲಿ ಹಾಜರಿದ್ದರು. ಮುಖ್ಯೋಪಾಧ್ಯಾಯರಾದ ಕೆ. ಎಲ್. ಗೋವಿಂದರಾವ್ ಸ್ವಾಗತಿಸಿ ವಂದಿಸಿದರು.

### ಉತ್ತಮೇಶ್ವರ

ಇಲ್ಲಿನ ಹಿರಿಯ ಪ್ರಾಥಮಿಕ ಶಾಲೆಯಲ್ಲಿ ನಡೆದ ಪಠ್ಯ ಪುಸ್ತಕ ವಿತರಣೆ ಸಮಾರಂಭದ ಅಧ್ಯಕ್ಷತೆಯನ್ನು ವಿ. ರಾಮರಾವ್ ವಹಿಸಿದ್ದು, ಡಾ॥ ಕೋದಂಡರಾವ್ ಮುಖ್ಯ ಅತಿಥಿಯಾಗಿದ್ದರು. ಮುಖ್ಯ ಶಿಕ್ಷಕರಾದ ಬಿ. ರಂಗಪ್ಪ ಸ್ವಾಗತಿಸಿ, ಆರ್.ಎನ್. ನಾಗರಾಜ್ ವಂದಿಸಿದರು.

### ಗುಣವಂತೆ

ಇಲ್ಲಿನ ಹಿರಿಯ ಪ್ರಾಥಮಿಕ ಶಾಲೆಯಲ್ಲಿ ಶಾಲಾಭಿವೃದ್ಧಿ ಸಮಿತಿ ಅಧ್ಯಕ್ಷರಾದ ಜಿ.ಡಿ. ಪರಮೇಶ್ವರ ಅವರ ಅಧ್ಯಕ್ಷತೆಯಲ್ಲಿ ಉಚಿತ ಪಠ್ಯಪುಸ್ತಕಗಳನ್ನು ವಿತರಿಸಲಾಯಿತು. ಸಭೆಯಲ್ಲಿ ಮಾತನಾಡಿದ ಕೆ.ಆರ್. ಚಂದ್ರಶೇಖರ್, ಕೆ.ಜಿ. ಚನ್ನಯ್ಯ, ಕೆ.ಎಂ. ಸತೀಶ್ ಸರ್ಕಾರದ ಈ ಕಾರ್ಯಕ್ರಮವನ್ನು ಪ್ರಶಂಸಿಸಿದರು. ಮುಖ್ಯೋಪಾಧ್ಯಾಯರಾದ ಹೆಚ್. ಟಿ. ರುದ್ರಪ್ಪ ವಂದಿಸಿದರು.

### ಕೊಪ್ಪ

ಇಲ್ಲಿನ ಮಾದರಿ ಹಿ.ಪ್ರಾ. ಶಾಲೆಯಲ್ಲಿ ಶಾಲಾಭಿವೃದ್ಧಿ ಸಮಿತಿ ಅಧ್ಯಕ್ಷರಾದ ಎಸ್. ಆರ್. ನಾರಾಯಣ ಭಟ್ ಅವರ ಅಧ್ಯಕ್ಷತೆಯಲ್ಲಿ ಪುರಸಭಾಧ್ಯಕ್ಷ ಕೆ.ವಿ. ಮಂಜುನಾಥ ಶೆಟ್ಟಿ ಮಕ್ಕಳಿಗೆ ಉಚಿತ ಪಠ್ಯಪುಸ್ತಕ ವಿತರಿಸಿದರು. ಪಿ. ಚಂದ್ರಶೇಖರ್ ಸ್ವಾಗತಿಸಿ, ಪದವೀಧರ ಮುಖ್ಯೋಪಾಧ್ಯಾಯರಾದ ಟಿ. ಎಸ್. ಶೇಷಭಟ್ ವಂದಿಸಿದರು.

### ಬಾಳಗಡಿ

ಇಲ್ಲಿನ ಮಾದರಿ ಹಿ. ಪ್ರಾ. ಶಾಲೆಯಲ್ಲಿ ಸಹಾಯಕ ಶಿಕ್ಷಣಾಧಿಕಾರಿ ಹೆಚ್.ಎಂ. ಮಲ್ಲಯ್ಯನವರ ಅಧ್ಯಕ್ಷತೆಯಲ್ಲಿ ನಡೆದ ಸಮಾರಂಭದಲ್ಲಿ ಕ್ಷೇತ್ರಾಭಿವೃದ್ಧಿ ಅಧಿಕಾರಿಗಳಾದ ಪಿ. ಬಾಲಪ್ಪ ಅವರು ಮಕ್ಕಳಿಗೆ ಉಚಿತ ಪಠ್ಯಪುಸ್ತಕ ವಿತರಿಸಿದರು. ಶಾಲಾ ತನಿಖಾಧಿಕಾರಿ ಬಿ. ಶಿವಮೂರ್ತಿ ಮಾತನಾಡಿದರು. ಮುಖ್ಯೋಪಾಧ್ಯಾಯ ಎಂ. ಎಸ್. ಲಕ್ಷ್ಮೀನಾರಾಯಣ್ ಸ್ವಾಗತಿಸಿ, ಅಧ್ಯಾಪಕ ವೆಂಕಟೇಶ್ ಮೂರ್ತಿ ವಂದಿಸಿದರು.

## ಶ್ರದ್ಧಾಂಜಲಿ

ನಮ್ಮ ತಾಯಿಯವರಾದ
**ತನೂಡಿ ಶ್ರೀಮತಿ ಈರಮ್ಮನವರು**
ತಾ. 31–5–85ನೇ ಶುಕ್ರವಾರ
ದೈವಾಧೀನರಾದರೆಂದು ತಿಳಿಸಲು
ವಿಷಾದಿಸುತ್ತೇವೆ
ಮೃತರ ಆತ್ಮಕ್ಕೆ ಶಾಂತಿ ಕೋರುವ,
ಮಕ್ಕಳು ತನೂಡಿ ಸೂರಪ್ಪ ಗೌಡ,
ಲೋಕಪ್ಪ ಗೌಡ, ಕೊಲ್ಲಪ್ಪ ಗೌಡ,
ಮತ್ತು ಬಂಧುವರ್ಗ,
ಕಾಚಕಲ್ ಅಂಚೆ, ಕೊಪ್ಪ ತಾ॥



ಕೊಪ್ಪ ತಾಲ್ಲೂಕು ಒಕ್ಕಲಿಗರ ಸಂಘ(ರಿ.), ಕೊಪ್ಪ.

## ಸರ್ವ ಸದಸ್ಯರ ಸಭೆಯ ಆಹ್ವಾನ

ಸಂಘದ ಸರ್ವಸದಸ್ಯರ ಸಭೆಯನ್ನು ತಾ. 19–6–85ನೇ ಬುಧವಾರ ಮಧ್ಯಾಹ್ನ 2 ಘಂಟೆಗೆ ಸರಿಯಾಗಿ ಕೊಪ್ಪ ಶ್ರೀ ದಾಸಮಠ ಆವರಣದಲ್ಲಿರುವ ಒಕ್ಕಲಿಗರ ಸಂಘದ ಕಟ್ಟಡದಲ್ಲಿ
ಸಂಘದ ಅಧ್ಯಕ್ಷರಾದ
**ಶ್ರೀ ಎಂ. ಡಿ. ಬಾಲಕೃಷ್ಣ,** ಬಿ.ಎ. (ಆನರ್ಸ್)
ಇವರ ಘನ ಅಧ್ಯಕ್ಷತೆಯಲ್ಲಿ ಏರ್ಪಡಿಸಲಾಗಿದೆ.
ಸಂಘದ ಸದಸ್ಯರು ಹಾಗೂ ಅಭಿಮಾನಿಗಳು ಇದನ್ನೇ ಆಹ್ವಾನವೆಂದು ಭಾವಿಸಿ ಸಭೆಗೆ ದಯಮಾಡಿಸಬೇಕೆಂದು ವಿನಂತಿ.

ಕೊಪ್ಪ
5–6–85

ಹೆಚ್.ಎಸ್. ಶ್ರೀನಿವಾ
ಗೌ॥ ಕಾರ್ಯದರ್ಶಿ
ಕೊಪ್ಪ ತಾ॥ ಒಕ್ಕಲಿಗರ ಸಂಘ (ರಿ.

ಸಂಪಾದಕ, ಮುದ್ರಕ ಮತ್ತು ಪ್ರಕಾಶಕ: ಸಿರಿಮನೆ ನಾಗರಾಜ್; ಅಚ್ಚು: ದೀವಟಿಗೆ ಅಚ್ಚುಕೂಟ, ಕೊಪ್ಪ.